# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 132(873)
2. ಮಾನ್ಯ ಸದಸ್ಯರ ಹೆಸರು ಶ್ರೀ ಹೆಚ್.ಎಂ. ರಮೇಶ್‌ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ 28/09/2020
4. ಉತ್ತರಿಸುವವರು ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ಸಂಕಷ್ಟ ಕಾಲದಲ್ಲಿ ವಲಸೆ ಕೂಲಿ ಕಾರ್ಮಿಕರು ಮತ್ತು ಅಸಂಘಟಿತ ಕೂಲಿ ಕಾರ್ಮಿಕರ ದಾರುಣ ಪರಿಸ್ಥಿತಿ ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು. |
| ಆ) | ಈ ಕಾರ್ಮಿಕರ ಶಾಶ್ವತ ಕಲ್ಯಾಣಕ್ಕಾಗಿ ಯಾವ ಯಾವ ಯೋಜನ ರೂಪಿಸಲಾಗುವುದು: | <u>ಇಲಾಖೆಯ ಅಧೀನದಲ್ಲಿರುವ ಮಂಡಳಿಗಳ ಮೂಲಕ ಕಾರ್ಮಿಕರ ಕಲ್ಯಾಣಕ್ಕಾಗಿ ಈ ಕೆಳಗಿನಂತೆ ಯೋಜನೆಗಳನ್ನು ಈಗಾಗಲೇ ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ.</u><br>**1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಮಂಡಳಿಯ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಹಾಗೂ ಅವರ ಅವಲಂಬಿತರಿಗಾಗಿ 19 ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳನ್ನು ರೂಪಿಸಿ ಸೌಲಭ್ಯಗಳನ್ನು ಒದಗಿಸಲಾಗಿದೆ. ವಿವರಗಳನ್ನು **ಅನುಬಂಧ-1**ರಲ್ಲಿ ಒದಗಿಸಲಾಗಿದೆ.<br>ಮುಂದುವರೆದು, 2020-21 ನೇ ಸಾಲಿನ ಮಂಡಳಿಯ ಆಯವ್ಯಯದಲ್ಲಿ 10 ಹೊಸ ಯೋಜನೆಗಳನ್ನು ರೂಪಿಸಲು ಅನುಮೋದನೆ ಪಡೆಯಲಾಗಿರುತ್ತದೆ. ವಿವರಗಳನ್ನು <u>ಅನುಬಂಧ-1(ಎ)</u> ರಲ್ಲಿ ನೀಡಿದೆ.<br><br>2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br>**ಈ ಮಂಡಳಿಯ ಮೂಲಕ 2 ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ.**<br>**1. ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**<br>**<u>ಗುರಿ:</u>** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಸಾರಿಗೆ ಇಲಾಖೆಯಿಂದ ಊರ್ಜಿತ ಚಾಲನಾ ಪರವಾನಗಿ ಹೊಂದಿರುವ ಎಲ್ಲಾ ಚಾಲಕರಿಗೆ ಯೋಜನೆಯಡಿ ಸೌಲಭ್ಯಗಳನ್ನು ಒದಗಿಸುವ ಗುರಿ ಹೊಂದಲಾಗಿದೆ.<br>**<u>ಸಾಧನೆ:</u>** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಸಾರಿಗೆ ಇಲಾಖೆಯಿಂದ ಊರ್ಜಿತ ಚಾಲನಾ ಪರವಾನಗಿ ಹೊಂದಿರುವ ಎಲ್ಲಾ 7,78,485 ಚಾಲಕರನ್ನು ಯೋಜನೆಯ ವ್ಯಾಪ್ತಿಗೆ ತರಲಾಗಿದೆ.<br>ಈ ಯೋಜನೆಯಡಿ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ:-<br>**<u>ಅ) ಅಪಘಾತ ಪರಿಹಾರ:-</u>**<br>**<u>ಗುರಿ:</u>** ಅಪಘಾತದಿಂದಾದ ಮರಣ ಪ್ರಕರಣಗಳಲ್ಲಿ ರೂ. 5 ಲಕ್ಷ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದ ವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ.<br>**<u>ಸಾಧನೆ:</u>** ಯೋಜನೆಯಡಿ ಈವರೆಗೆ ಪರಿಹಾರ ನೀಡಲ್ಪಟ್ಟ ಪ್ರಕರಣಗಳ ವಿವರ ಹೀಗಿದೆ:- |

| ಕ್ರ ಸಂ | ವಿವರಣೆ | ಪ್ರಕರಣ | ಪರಿಹಾರದ ಮೊತ್ತ |
|---|---|---|---|
| 1 | ಮರಣ | 555 | ರೂ.18,20,50,000/- |
| 2 | ಶಾಶ್ವತ ದುರ್ಬಲತೆ | 05 | ರೂ.5,00,000/- |
| 3 | ಆಸ್ಪತ್ರೆ ವೆಚ್ಚದ ಮರುಪಾವತಿ/ತಾತ್ಕಾಲಿಕ ದುರ್ಬಲತೆ | 137 | ರೂ.51,10,740/- |
| | ಒಟ್ಟು | 697 | **ರೂ.18,66,12,620/-** |

**ಆ) ಶೈಕ್ಷಣಿಕ ಧನ ಸಹಾಯ:-**

**ಗುರಿ:** ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ ಒಂದನೇ ತರಗತಿಯಿಂದ ಪದವಿಪೂರ್ವ ತರಗತಿಯ ವರೆಗೆ ವ್ಯಾಸಂಗ ಮಾಡಲು ವಾರ್ಷಿಕ ತಲಾ ರೂ.10,000/-ರಂತೆ ಶೈಕ್ಷಣಿಕ ಸಹಾಯ ಧನ ವಿತರಿಸಲಾಗುತ್ತಿದೆ.

**ಸಾಧನೆ:** ಈವರೆಗೆ ವಿವಿಧ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ 321 ವಿದ್ಯಾರ್ಥಿಗಳಿಗೆ ಒಟ್ಟು ರೂ.32,10,000/-ಗಳ ಶೈಕ್ಷಣಿಕ ಸಹಾಯ ಧನ ವಿತರಿಸಲಾಗಿದೆ.

**ಇ) ಅಪಘಾತ ಜೀವರಕ್ಷಕ ಕಾರ್ಯಕ್ರಮ:-**

**ಗುರಿ:** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಪ್ರಥಮ ಚಿಕಿತ್ಸಾ ತರಬೇತಿ ನೀಡುವ ಗುರಿ ಹೊಂದಲಾಗಿದೆ.

**3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**

ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ವಂತಿಕೆ ಪಾವತಿಸುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಕೆಳಕಂಡ ಕಲ್ಯಾಣ ಯೋಜನೆಗಳು ಜಾರಿಯಲ್ಲಿರುತ್ತವೆ.

1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ
2. ವೈದ್ಯಕೀಯ ನೆರವು.
3. ಅಪಘಾತ ಧನ ಸಹಾಯ.
4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.
5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಭಿರಕ್ಕೆ ಧನ ಸಹಾಯ.
6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ.

ಇ) ಕಾರ್ಮಿಕ ಕಲ್ಯಾಣ ನಿಧಿಗೆ ಕಳೆದೆರಡು ವರ್ಷಗಳಿಂದ ಎಷ್ಟು ಹಣ ಸಂಗ್ರಹವಾಗಿದೆ ಹಾಗೂ ಯಾವ ಯಾವ ಯೋಜನೆಗಳಿಗೆ ಬಳಕೆಯಾಗಿದೆ; (ವಿವರ ನೀಡುವುದು )

**1. ಕರ್ನಾಟಕ ಕಟ್ಟಡ ಮತ್ತು ಇತ್ತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**

ಈ ಮಂಡಳಿಯ ಕಲ್ಯಾಣ ನಿಧಿಯಲ್ಲಿ ಕಳೆದ ಎರಡು ವರ್ಷಗಳಲ್ಲಿ (2018-19 ಮತ್ತು 2019-20) ಒಟ್ಟು ರೂ.2579.06 ಕೋಟಿ ಸಂಗ್ರಹವಾಗಿರುತ್ತದೆ. ಈ ಮೊತ್ತದಲ್ಲಿ ಮಂಡಳಿಯ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಿಗಾಗಿ ಖರ್ಚು ಮಾಡಿರುವ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಿದೆ.

**2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**

ಈ ಮಂಡಳಿಯಲ್ಲಿ ಯಾವುದೇ ಕಾರ್ಮಿಕ ಕಲ್ಯಾಣ ನಿಧಿ ಇರುವುದಿಲ್ಲ ಬದಲಾಗಿ ರಾಜ್ಯ ಸರ್ಕಾರವು ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಿಗೆ ಸಂಬಂಧಿಸಿದಂತೆ, ಯೋಜನೆವಾರು ಹಂಚಿಕೆ

| | | |
|---|---|---|
| | | ಮಾಡಿರುವ ಅನುದಾನದಿಂದ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.<br>**3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**<br>ಕಾರ್ಮಿಕ ಕಲ್ಯಾಣ ಮಂಡಳಿಗೆ 20:40:20 ರ ಅನುಪಾತದಲ್ಲಿ 2018–19ನೇ ಸಾಲಿಗೆ ರೂ. 28.4 ಕೋಟಿ ಮತ್ತು 2019–20ನೇ ಸಾಲಿಗೆ ರೂ. 31.96 ಕೋಟಿಗಳು ಸಂಗ್ರಹವಾಗಿದ್ದು, ಒಟ್ಟು ರೂ. 60.36 ಕೋಟಿ ಕಾರ್ಮಿಕ ಕಲ್ಯಾಣ ನಿಧಿಗೆ ಸಂಗ್ರಹಿಸಲಾಗಿದೆ. ವಿವರಗಳು ಈ ಕೆಳಗಿನಂತಿವೆ.<br>2018–19ನೇ ಸಾಲಿನಿಂದ 2019–20ನೇ ಸಾಲಿನವರೆಗೆ ಕಾರ್ಮಿಕ ಕಲ್ಯಾಣ ಯೋಜನೆಯಡಿ ಸೌಲಭ್ಯಗಳನ್ನು ಪಡೆದುಕೊಂಡ ಫಲಾನುಭವಿಗಳ ವಿವರಗಳನ್ನು **ಅನುಬಂಧ–3** ರಲ್ಲಿ ಲಗತ್ತಿಸಿದೆ. |
| ಈ) | ರಾಜ್ಯಾದ್ಯಂತ ಕೂಲಿ ಕಾರ್ಮಿಕರು ಕೋವಿಡ್ ನಂತರದ ದಿನಗಳಲ್ಲಿ ಆರ್ಥಿಕ ಸಂಕಷ್ಟದಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಬಂದಿದಲ್ಲಿ, ಇದಕ್ಕೆ ಪರಿಹಾರವೇನು ? | ಹೌದು, ಕಾರ್ಮಿಕ ಇಲಾಖೆಯ ಅಧೀನದಲ್ಲಿ ಇರುವ ಮಂಡಳಿಗಳ ಮೂಲಕ ಈ ಕೆಳಕಂಡಂತೆ ಪರಿಹಾರವನ್ನು ಕಾರ್ಮಿಕರಿಗೆ ನೀಡಲಾಗಿರುತ್ತದೆ<br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:–**<br>ಮಂಡಳಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ರೂ.5000/– ಗಳ ಸಹಾಯಧನವನ್ನು ಮಂಡಳಿಯಿಂದ ನೀಡಲಾಗಿರುತ್ತದೆ. 16,48,431 ಕಾರ್ಮಿಕರಿಗೆ ರೂ.824.21 ಕೋಟಿಯಷ್ಟು ಪರಿಹಾರವನ್ನು ವಿತರಿಸಲಾಗಿರುತ್ತದೆ.<br>**2.ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಈ ಮಂಡಳಿಯ ವತಿಯಿಂದ ಜಾರಿಗೊಳಿಸುತ್ತಿರುವ ಮೇಲ್ಕಂಡ ಯೋಜನೆಗಳ ಸೌಲಭ್ಯಗಳನ್ನು ನಿಗದಿತ ಅವಧಿಯಲ್ಲಿ ಫಲಾನುಭವಿಗಳಿಗೆ ಒದಗಿಸಲಾಗುತ್ತಿದೆ.<br>ಕೋವಿಡ್–19 ಸಂಕಷ್ಟದ ಸಂದರ್ಭದಲ್ಲಿ ಸರ್ಕಾರವು ಲಾಕ್‌ಡೌನ್ ಜಾರಿಗೊಳಿಸಿದ್ದ ಪರಿಣಾಮವಾಗಿ ಕಾರ್ಮಿಕರಿಗೆ ಆರ್ಥಿಕವಾಗಿ ನಷ್ಟವಾಗಿರುವುದನ್ನು ಗಮನಿಸಿ, ದಿನಾಂಕ: 06–05–2020ರಂದು, ಅಗಸರು ಹಾಗೂ ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಅಸಂಘಟಿತ ಕಾರ್ಮಿಕರಿಗೆ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಒಂದು ಬಾರಿ ತಲಾ ರೂ.5,000/–ಗಳ ನೆರವನ್ನು ಘೋಷಿಸಲಾಗಿತ್ತು.<br>ದಿನಾಂಕ:15–08–2020 ರವರೆಗೆ ಅಗಸ ವೃತ್ತಿ ನಿರ್ವಹಿಸುತ್ತಿರುವ 74,782 ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 66,820 ಅರ್ಜಿದಾರರು ಸೇರಿದಂತೆ ಒಟ್ಟು 1,41,602 ಅರ್ಜಿಗಳನ್ನು ಸ್ವೀಕರಿಸಲಾಗಿದೆ.<br>ಅವುಗಳಲ್ಲಿ ಈವರೆಗೆ 1,14,388 ಅರ್ಜಿದಾರರಿಗೆ ತಲಾ ರೂ.5,000/– ಗಳಂತೆ ಒಟ್ಟು ರೂ.57.19ಕೋಟಿ ಮೊತ್ತವನ್ನು ಅವರವರ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ವರ್ಗಾಯಿಸಲಾಗಿದೆ. |

**ಕಾಇ 327 ಎಲ್‌ಇಟಿ 2020**

*(ಅರಬೈಲ್ ಶಿವರಾಂ ಹೆಬ್ಬಾರ್)*
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

## ಅನುಬಂಧ-01

## ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ(ಶ್ರಮ ಸಾಮರ್ಥ್ಯ):** ರೂ. 30,000/- ವರೆಗೆ
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ)**: ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**

13. **ಅಪಘಾತ ಪರಿಹಾರ**: ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**

14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ)**: ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯುಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-ವರೆಗೆ**

15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್)**: ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**

16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ)**: ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್

17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ**: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ

18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ**: ರಾಜ್ಯಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ ( ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)

19. **ತಾಯಿ ಮಗು ಸಹಾಯ ಹಸ್ತ**: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

ಅನುಬಂಧ-01 (ಎ)

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ 2020 –21 ನೇ ಸಾಲಿನ ಆಯವ್ಯಯದಲ್ಲಿ ರೂಪಿಸಿರುವ 10 ಹೊಸ ಯೋಜನೆಗಳು**

| ಕ್ರ.ಸಂ | ಹೊಸ ಯೋಜನೆಗಳು |
|---|---|
| 1 | ಫಲಾನುಭವಿಗಳ ಮಕ್ಕಳಿಗೆ ಲ್ಯಾಪ್ ಟಾಪ್ ವಿತರಣೆ (Higher Education-Diploma, ITI, Degree & Post Graduation). |
| 2 | ಫಲಾನುಭವಿಗಳ ಓದುತ್ತಿರುವ ಮಕ್ಕಳಿಗೆ ಶೈಕ್ಷಣಿಕ ಕಿಟ್ ವಿತರಣೆ |
| 3 | ವೃತ್ತಿಪರ ಕೋರ್ಸ್‌ಗಳಲ್ಲಿ ವಿಧ್ಯಾಬ್ಯಾಸ ಮಾಡುತ್ತಿರುವ ಫಲಾನುಭವಿಗಳ ಮಕ್ಕಳಿಗೆ ಶಾಲಾ ಶುಲ್ಕ ಮರುಪಾವತಿ ಯೋಜನೆ |
| 4 | ಫಲಾನುಭವಿ ಮತ್ತು ಅವರ ಅವಲಂಬಿತರು ವಿವಿಧ ಕ್ಷೇತ್ರಗಳಲ್ಲಿ ಮಾಡುವ ಅಸಾಧಾರಣ ಸಾಧನೆಯನ್ನು ಗುರುತಿಸಿ ಪುರಸ್ಕರಿಸುವ ಯೋಜನೆ |
| 5 | ಆರೋಗ್ಯ ಕಾಪಾಡಿಕೊಳ್ಳುವ ಬಗ್ಗೆ ತರಬೇತಿ ಮತ್ತು ತಪಾಸಣೆಯ ಯೋಜನೆ. |
| 6 | Pre-paid Health Card ಯೋಜನೆ |
| 7 | ಮೋಬೈಲ್ ಕ್ಲಿನಿಕ್ ಯೋಜನೆ |
| 8 | ಪೌಷ್ಟಿಕ ಆಹಾರ ಕಿಟ್ ಯೋಜನೆ. |
| 9 | ಪ್ರಧಾನ ಮಂತ್ರಿಗಳ ಭೀಮಾ ಜೀವನ್ ಜ್ಯೋತಿ ಯೋಜನೆ ಅನುಷ್ಠಾನ |
| 10 | Safety & Quick response team ಯೋಜನೆ. |

ಅನುಬಂಧ–2

## 2018–19 ಮತ್ತು 2019–20 ನೇ ಸಾಲಿನಲ್ಲಿ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಿಗಾಗಿ ಖರ್ಚು ಮಾಡಿರುವ ವಿವರ

| ಸೌಲಭ್ಯಗಳ ವಿವರ | 2018–19 | | 2019–20 | |
|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಧನಸಹಾಯ | 95,637 | 533,279,365 | 125,403 | 724,788,917 |
| ಮದುವೆ ಧನಸಹಾಯ | 11,380 | 475,875,000 | 10,966 | 453,596,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 2,208 | 117,282,000 | 3,674 | 198,641,000 |
| ಪ್ರಮುಖ ವೈದ್ಯಕೀಯ | 530 | 12,829,473 | 778 | 22,668,307 |
| ಅಪಘಾತ ಪರಿಹಾರ | 58 | 13,781,000 | 116 | 31,957,000 |
| ಹೆರಿಗೆ ಧನಸಹಾಯ | 552 | 9,160,000 | 572 | 11,930,174 |
| ವೈದ್ಯಕೀಯ ವೆಚ್ಚ | 192 | 5,592,698 | 95 | 2,019,557 |
| ಉಪಕರಣ ಖರೀದಿಗೆ ಸಾಲ | 0 | 0 | 0 | 0 |
| ಪಿಂಚಣಿ ಸೌಲಭ್ಯ | 520 | 12,052,000 | 627 | 23,026,000 |
| ದುರ್ಬಲತೆ ಪಿಂಚಣಿ | 7 | 1,214,000 | 18 | 2,999,000 |
| ಅನಿಲ ಭಾಗ್ಯ | 4,055 | 0 | 0 | 0 |
| ಶ್ರಮ ಸಾಮರ್ಥ್ಯ | 3,157 | 56,972,953 | 623 | 90,170,239 |
| ಬಿಎಂಟಿಸಿ ಬಸ್ ಪಾಸ್ | 1,602 | 0 | 2,996 | 594,300 |
| ವಸತಿ ಸೌಲಭ್ಯ | 0 | 0 | 5,129 | 760,000,000 |
| ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 0 | 0 | 501 | 3,000,000 |
| **ಒಟ್ಟು** | **1,19,898** | **123,80,38,489** | **1,51,498** | **232,53,90,494** |

## ಅನುಬಂಧ–3

| | ವರ್ಷ | 2018–19 | | 2019–20 | |
|---|---|---|---|---|---|
| | ಯೋಜನೆಗಳ ವಿವರ | ಫಲಾನುಭವಿ ಸಂಖ್ಯೆ | ಮೊತ್ತ ರೂ. | ಫಲಾನುಭವಿ ಸಂಖ್ಯೆ | ಮೊತ್ತ ರೂ. |
| 1. | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 21,127 | 8,57,34,000 | 26,257 | 10,51,98,000 |
| 2. | ವೈದ್ಯಕೀಯ ನೆರವು. | 9 | 74,011 | 5 | 45,252 |
| 3. | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ. | 326 | 16,30,000 | 295 | 14,75,000 |
| 4. | ಕಾರ್ಮಿಕರ ಅಪಘಾತ ಧನ ಸಹಾಯ | 1 | 3,000 | – | – |
| 5. | ಅಂಗವಿಕಲ ಕಾರ್ಮಿಕರಿಗೆ ಕೃತಕ ಅಂಗಸಾಧನ ಖರೀದಿಸಲು ಧನ ಸಹಾಯ | 1 | 5,000 | – | – |
| 6. | ವೈದ್ಯಕೀಯ ತಪಾಸಣಾ ಶಿಬಿರ | – | – | 400 (2 ಸಂಘಟನೆ) | 60,000 |
| 7. | ವಾರ್ಷಿಕ ಕ್ರೀಡಾ ಚಟುವಟಿಕೆ | 700 (1 ಸಂಘಟನೆ) | 50,000 | 600 (2 ಸಂಘಟನೆ) | 1,00,000 |
| 8. | ಒಟ್ಟು | **22,164** | **8,74,96,011** | 27,557 | 10,68,78,252 |